


## ಕುರಾಮುರಿಗಾದಿ

ಬಿ. ರಾಮಚಂದ್ರ ಭಟ್ಟ.

...ನ ಸಾಹಿತ್ಯ ಮಾಲೆ

ಮುಂಡಾಜೆ.



ಮುದ್ರಕರು:— ಕೆ. ಮಂಗೇಶ ರಾವ್,
ಜ್ಯೋತಿ ಪ್ರಿಂಟಿಂಗ್ & ಪಬ್ಲಿಷಿಂಗ್ ಹೌಸ್, ಲಿ., ಮಂಗಳೂರು.

## ಹೊಸ ಪ್ರಕಟಣೆ.

ಕನ್ನಡಿಗರಿಗೊಂದು ಸಾಹಿತ್ಯದ ಸವಿಯೂಟ.

"ವಿಚಾರ ಸಾಹಿತ್ಯ ಮಾಲೆ"ಯ ಪ್ರಥಮ ಪುಷ್ಪ.

ಕೆ. ಯನ್. ಭಟ್, ವಿರಚಿತ

# "ಕಾವ್ಯತರಂಗ"

(ಜನಪ್ರಿಯ ಕವಿತೆಗಳು)

ನೀತಿ ಬೋಧಕ ವಿಚಾರಗಳು.

ಸುಲಭ ಸರಳವಾದ ಶೈಲಿ!

ವರ್ಣ ರಂಜಿತ ಚಿತ್ರದೊಡನೆ
ಪ್ರಕಟವಾಗಿದೆ.

ಬೆಲೆ: ಎಂಟಾಣೆ.

ಪ್ರತಿಗಳು ದೊರೆಯುವ ಸ್ಥಳ:

R. S. PHADKE
ಮರ್ಚೆಂಟ್,
P. O. MUNDAJE,
S. K.

K. N. BHAT.
"Shiradipal"
P. O. MUNDAJE.
S. K.

ತಮ್ಮನ ಸಾಹಿತ್ಯ ಮಾಲೆ. ಕುಸುಮ ಎರಡು.



# ಶಿಶು ವಿಹಾರ

ಶ್ರೀ|| ಮಂಜೇಶ್ವರ ಗೋವಿಂದ ಪೈ. ಅವರ
ಮುನ್ನುಡಿಯೊಡನೆ

ಬಿ. ರಾಮಚಂದ್ರ ಭಟ್ಟ,



ಪ್ರಕಾಶಕರು:
"ತಮ್ಮನ ಸಾಹಿತ್ಯ ಮಾಲೆ"
ಮುಂಡಾಜೆ ದ. ಕ.

ಬೆಲೆ: ನಾಲ್ಕು ಆಣೆ.

ತಮ್ಮನ ಸಾಹಿತ್ಯಮಾಲೆ ಮುಂಡಾಜೆ

ತಮ್ಮನ ಕವಿತೆಗಳು ಬೆಲೆ: ಆರು ಆಣೆ.
ಶಿಶುವಿಹಾರ ,, ನಾಲ್ಕು ,,

ಸೌ। ಸೀತಾಬಾಯಿ ತಾಮನಕರ.
P. O. MUNDAJE (S. K. Dt.)



*PUBLISHED BY*

**SOW SEETHA BAI THAMANKER**

FOR

THAMMANA SAHITHYAMALA MUNDAJE.

*PRINTED BY*

Jyoti Printing & Publishing House Limited.,
Maidan Cross Road,
MANGALORE 1.




# ಪರಿವಿಡಿ

# ಒಪ್ಪೋಲೆ

| ಪುಟ | ಕವಿತೆ | ಪಂಕ್ತಿ | ತಪ್ಪು | ಒಪ್ಪು |
|---|---|---|---|---|
| ೧ | ಬೆಳಗಾಯಿತಣ್ಣ | ೧೧ | ಹ್ಯೋತು | ಹೋಯ್ತು |
| ೩ | ನವಭಾರತದ ಉದಯ | ೯ | ಛಳಿಗೆ | ಚಳಿಗೆ |
| ೪ | ,, | ೫ | ದ್ವೇಶ | ದ್ವೇಷ |
| ೬ | ಕಂದನ ಕರೆ | ೧೩ | ಸಕರೆ | ಸಕ್ಕರೆ |
| ೧೧ | ಎಳೆಯ ಕೊರಗು | ೯ | ಹ್ಯೋತಲ್ಲ | ಹೋಯ್ತಲ್ಲ |
| ೧೩ | ತಾಜಮಹಲು | ೮ | ಡಿಲ್ಲಿ | ಢಿಲ್ಲಿ |
| ೧೫ | ಅರಬರು | ೬ | ಛಳಿಯು | ಚಳಿಯು |
| ,, | ,, | ೮ | ಸೆಖೆ | ಸೆಕೆ |
| ,, | ,, | ೯ | ಮಾರುತ | ಗಾಳಿಯು |
| ೧೬ | ಮಳೆಯ ಕಥೆ | ೧೧ | ಥಳಿಸಿತು | ಥಳಕಿತು |
| ೧೭ | ಇರುವೆ ಮಗುಗಳ ಸಂವಾದ | ೧೪ | ನ್ಯೊವೆ | ನೊಯ್ವೆ |
| ೧೯ | ಅ ಹ—ಪ್ಪ—ಳ | ೯ | ಸಪ್ಬಳ | ಸಪ್ಪಳ |
| ,, | ,, | ೧೦ | ನ್ಯಾತಪ್ಪ | ನಾಯ್ತಪ್ಪ |
| ,, | ತಂಗಿ ಅಪ್ಪಿ | ೧೨ | ಬಿಗಿದೆನೆರಡು | ಕೊಟ್ಟೆನೆರಡು |

**ವಿ. ಸೂ.** ಪುಟ ೧೭ರಲ್ಲಿ ಶಿರೋನಾಮೆ "ಇರುವೆ ಮಗುಗಳ ಸಂವಾದ" ಎಂದು ಓದಬೇಕಾಗಿ ಕೋರುತ್ತೇನೆ.

# ★ ಮುನ್ನುಡಿ ★

ಇದೊಂದು ಚಿಣ್ಣರ ಸಲುವಾಗಿ ಬರೆದ ಕವಿತೆಗಳ ಪುಸ್ತಕ. ಆತಕ್ಕಂತೆ ಈ ಕವಿತೆಗಳೆಲ್ಲವೂ ಬಹಳ ಸುಲಭವಾಗಿವೆ, ಸೊಗಸಾಗಿವೆ— ಅವಲ್ಲಿಯೂ 'ಹುಚ್ಚು' (ಪುಟ 11) 'ಎಳೆಯ ಕೊರಗು' (ಪುಟ 11) 'ಮಡಿವಾಳ' (ಪುಟ 14) 'ಇರುವೆ ಮಗುಗಳ ಸಂವಾದ' (ಪುಟ 17) ಮುಂತಾದುವು ಬಹಳ ಚೆನ್ನಾಗಿವೆ— ಮಾತ್ರವಲ್ಲ, ಎಳೆಯ ಮಕ್ಕಳ ಪಾಠದ ಬಗ್ಗೆ ತುಂಬ ಉಚಿತವೂ ಆಗಿವೆ. ಆಪ್ರಯುಕ್ತ ಇದು ಬೇಗನೆ ಚಿಕ್ಕವರ ಶಾಲೆಗಳಲ್ಲಿ ಓದಿಸಲಿಕ್ಕೆ ಏರ್ಪಟ್ಟೀತು ಎಂದು ನಾನು ಕೋರುತ್ತೇನೆ.

ಈ ಚಲೋ ಕವಿತೆಗಳ ರಚಕರಾದ ಶ್ರೀ ಬಿ. ರಾಮಚಂದ್ರ ಭಟ್ಟರನ್ನು ಮನವಾರೆ ಅಭಿನಂದಿಸುತ್ತೇನೆ, ಹಾಗೂ ಅವರು ಮತ್ತೂ ಚಲೋ ಕವಿತೆಗಳನ್ನು ರಚಿಸುವಂತೆ ಪರಮಾತ್ಮನು ಅವರಲ್ಲಿ ದಯೆದೋರಲಿ ಎಂದು ಹಾರೈಸುತ್ತೇನೆ. ಇತಿ ಶಮ್.

ಗೋವಿಂದ ಪೈ.





# ಸಮರ್ಪಣೆ.



ನನ್ನ ಆತ್ಮೀಯ ಹಿತಚಿಂತಕರೂ ವಯೋ
ವೃದ್ಧರೂ ವಿದ್ಯಾಭಿಮಾನಿಗಳೂ ಆದ
ಶ್ರೀಮಾನ್ ಭಿಡೆ ನಾರಾಯಣ ಭಟ್ಟ
ಇವರ ಚರಣ ತಲದಲ್ಲಿ ಈ ಪುಟ್ಟ
ಪುಸ್ತಕವನ್ನು ಭಕ್ತಿಯಿಂದ
ಅರ್ಪಿಸುವೆನು.

ರಾಮಚಂದ್ರ.

# ನನ್ನ ಮಾತು

ಇದು ನನ್ನ ಎರಡನೆ ಕವನ ಸಂಕಲನ. ಇವರಲ್ಲಿ ನಾನು ಬರೆದ ಇಪ್ಪತ್ತೆರಡು ಶಿಶು ಗೀತೆಗಳಿವೆ. 'ಪ್ರಾರ್ಥನೆ; 'ತಮ್ಮನ ಚೆಂಡು; 'ಹುಚ್ಚು; 'ಮಳೆಯ ಕಥೆ; 'ಕಂದನ ಕರೆ; 'ನಮ್ಮ ಬಾವುಟ; 'ತಂಗಿ ಅಪ್ಪಿ; 'ಸಂಗೀತ ಸರಸ್ವತಿ; 'ನವಭಾರತದ ಉದಯ; ಇವು ಬೇರೆ ಬೇರೆ ಪತ್ರಿಕೆ ಗಳಲ್ಲಿ ಆಗಾಗ ಪ್ರಕಟವಾಗಿವೆ. ಇವನ್ನು ಪ್ರಕಟಗೊಳಿಸಿದ ಸಂಪಾದಕ ಮಹಾಶಯರುಗಳಿಗೆ ನಾನು ಕೃತಜ್ಞ.

ಈ ಸಂಕಲನವನ್ನು ಬೆಳಕಿಗೆ ತರಲು ನನ್ನ ಅನೇಕ ಹಿತಚಿಂತಕರು ಸಹಕಾರ ನೀಡಿದ್ದಾರೆ. ನನ್ನ ಸಹೋದ್ಯೋಗಿ ಬಂಧುಗಳು ತುಂಬ ಉಪಕಾರ ಮಾಡಿದ್ದಾರೆ. ಕನ್ನಡ ಕಂದರು ಕವನಗಳನ್ನೋದಿ, ಹಾಡಿ, ನಲಿದು ಆನಂದಿಸುವಂತಾದರೆ ಆ ಶ್ರೇಯಸ್ಸು ನನಗಲ್ಲ. ಉಪಕರಿಸಿದವ ರಿಗೆ ಮುಡಿಪು.

ಮುಖ್ಯವಾಗಿ ಈ ಪುಟ್ಟ ಹೊತ್ತಗೆಗೆ ಸೊಗಸಾದ ಮುನ್ನುಡಿಯನ್ನು ದಯಪಾಲಿಸಿದ ರಾಷ್ಟ್ರಕವಿ ಶ್ರೀಮಾನ್ ಮಂಜೇಶ್ವರ ಗೋವಿಂದಪೈ ಅವರಿಗೆ ನನ್ನ ಅನಂತಾನಂತ ವಂದನೆಗಳು.

ಶ್ರೀ| ಮಾ| ವರ್ಧಮಾನ ಹೆಗ್ಗಡೆಯವರು ನನ್ನ ಕುರಿತು ಎರಡು ಮಾತು ಬರೆದು ಕಳುಹಿಸಿದ್ದಾರೆ. ನನ್ನ ಕೃತಿಯ ಜೊತೆಗೆ ಸಾನೇ ಪ್ರಕಟಿಸುವುದರ ಔಚಿತ್ಯದ ವಿಚಾರ ಮಾಡುವುದಕ್ಕಿಂತ ಹಿರಿಯರ ಆಶೀರ್ವಾದ ವೆಂತ ಆದರದಿಂದ ಪ್ರಕಟಿಷುವ ಸಾಹಸ ಮಾಡಿದ್ದೇನೆ.

'ತಮ್ಮನ ಕವಿತೆಗಳು' 'ಹಾಗೂ' ಶಿಶುವಿಹಾರ ಈ ಎರಡು ಪುಸ್ತಕ ಗಳಿಗೆ ಮಕ್ಕಳೊಲಿವಂತಹ ಸೊಗಸಾದ ಮುಖ ಚಿತ್ರಗಳನ್ನು ಚಿತ್ರಿಸಿ ಕೊಟ್ಟು ಶ್ರೀ| ಟಿ. ಕೃಷ್ಣರಾಯರು ದೊಡ್ಡ ಉಪಕಾರ ಮಾಡಿದ್ದಾರೆ. ಅವರಿಗೆ ನಾನು ಚಿರಋಣಿ.

ನನ್ನ ಸಾಹಿತ್ಯಾಭ್ಯಾಸದಲ್ಲಿ ಬೆನ್ನುತಟ್ಟಿ ಹುರಿದುಂಬಿಸಿದವರಲ್ಲಿ ಆತ್ಮೀಯ ಗೆಳೆಯರು ಶ್ರೀಯುತರುಗಳಾದ ಗೋಪಾಲ ಭಿಡೆ; ಮಾಣಿ

ಗಣಪತಿ ಭಟ್ಟ; ಡಿ. ಮಹಾದೇವ ಭಟ್ಟ; ರಾ. ವೋ. ವಿ; ಮತ್ತು ಶ್ರೀ। ಖಾಡಿಲ್ಕರ್. ಇವರನ್ನಿಲ್ಲಿ ನೆನೆಯದಿರಲಾರೆ.

'ಮಕ್ಕಳೇ ದೇವರು' ಎಂದು ನನ್ನೊಡನೆ ಅಚ್ಚುಪ್ರತಿ ತಿದ್ದಲು ಪಕರಿಸಿದ ಗೆ। ಶ್ರೀ ಕುಲಮರ್ವರೂ ಈ ಹೊತ್ತಗೆಯನ್ನು ಅಂದವಾಗಿ ಹೊರಬರುವಂತೆ ಮುದ್ರಿಸಿ ಉಪಕರಿಸಿದ ಜ್ಯೋತಿ ಮುದ್ರಣಾಲಯದ ವ್ಯವಸ್ಥಾಪಕರಾದ ಗೆ। ಶ್ರೀ ಕೆ. ಮಂಗೇಶರಾಯರೂ ವಂದನಾರ್ಹರು.

ಇದರಲ್ಲಿರುವ 'ಸಂಗೀತ ಸರಸ್ವತಿ' ಎಂಬ ಕವಿತೆಗೆ ಶಾಸ್ತ್ರೋಕ್ತ ಸ್ವರಗಳ ಮಿರುಗು ಕೊಟ್ಟ ನನ್ನ ಹಿರಿಯ ಸೋದರ ನಾ. ಅ. ತಾಮನಕರ ಅವರಿಗೆ ನನ್ನ ಸಾ। ವಂದನೆಗಳು.

ಕನ್ನಡ ಬಂಧು ಭಗಿನಿಯರು ಅಂದು ತಮ್ಮನ ಕವಿತೆಗಳನ್ನು ಆದರಿಸಿದಂತೆಯೇ ಇಂದು 'ಶಿಶುವಿಹಾರ'ವನ್ನೂ ಹಿಡಿದೆತ್ತಿ ತಮ್ಮ ಮುದ್ದು ಕಂದಮ್ಮಗಳ ಕೈಗಿತ್ತರೆ ನನ್ನಸೇವೆ ಸಾರ್ಥಕವಾದೀತು.

ಪ್ರಾಥಮಿಕ ಶಾಲೆ
ಮುಂಡಾಜೆ.
2—10—53
ಗಾಂಧಿಜಯಂತಿ.

ಬಿ. ರಾಮಚಂದ್ರ ಭಟ್ಟ.





# ಕವಿಪರಿಚಯ

ಮಿತ್ರರಾದ ರಸಿಕ ಕವಿ **ಶ್ರೀ। ರಾಮಚಂದ್ರ ಭಟ್ಟರ** ಪರಿಚಯ ರೂಪವಾಗಿ ಎರಡು ಮಾತು ಬರೆಯಲು ಅಪೇಕ್ಷಿಸಿದಂತೆ ನನಗೆ ಅವಕಾಶ ದೊರೆತುದಕ್ಕಾಗಿ ಬಹಳ ಆನಂದ ಪಡುವೆನು. ಇವರು ಮಲೆನಾಡಿನ ಮುಂಡಾಜೆ ಗ್ರಾಮದ ಶಾಲಾ ಅಧ್ಯಾಪಕರು. ಹಳ್ಳಿಯ ಮೂಲೆ ಮೂಲೆಗಳಲ್ಲಿಯೂ ರಸಿಕ ಕಲಾವಿದರು ಎಲೆಯ ಮರೆಯ ಕಾಯಂತೆ ತಲೆ ಮರೆಸಿರುವರು. ಆದರೆ ಅವರನ್ನು ಹುಡುಕಿ ಮುಂದಕ್ಕೆ ಬರುವಂತೆ ನಲ್ಮೆಯಿಂದ ಕರೆವ ಸತ್ಪುರುಷರು ಹಾಗೂ ಸಹೃದಯರು ಬಹಳ ವಿರಳ. ಆ ಸಂದರ್ಭ ಕಾಯದೆ ಉದ್ಯೋಗಿಗಳಾದವರು ಆತ್ಮವಿಶ್ವಾಸದಿಂದ ಕಾರ್ಯನಿರತರಿರುತ್ತಾರೆ. ಈ ಮಿತ್ರರು ಅದೇ ದಾರಿಯಲ್ಲಿ ನಡೆವವರು.

ಪವಿತ್ರವಾಗಿರತಕ್ಕ ಸಾಹಿತ್ಯ ಕ್ಷೇತ್ರವು ಇಂದು ಅಪರಿಪೂರ್ಣರ ಹೋರಾಟದಿಂದ ಕಲುಷಿತ ರೂಪವನ್ನು ತಾಳುವಂತಾಗುತ್ತಿದೆ. ಯೋಗ್ಯತೆ ಇದ್ದರೂ ಪ್ರಚಾರವಿಲ್ಲದೆ ಜನ ಇಂದು ತಿಳಿಯದಂತಾಗಿದೆ.

ಉತ್ಸಾಹೀ ತರುಣಸಾಹಿತ್ಯಿಕರು ಆತ್ಮಾರ್ಪಣ ಬುದ್ಧಿಯಿಂದ ಸ್ತುತಿನಿಂದೆಗಳೆಡೆಯಲ್ಲಿ ಮೈಮರೆಯದೆ ಕಾರ್ಯನಿರತರಾಗಿ ಲೋಕಸೇವೆಗೈಯತಕ್ಕ ಕಾಲ ಇದಾಗಿದೆ.

ಪಶ್ಚಿಮ ಘಟ್ಟದ ತಣ್ಣೆಲರು ಹಾಯುವ ಮುಂಡಾಜೆಯ ಸುತ್ತಲಿನ ನೈಸರ್ಗಿಕ ಸೌಂದರ್ಯವು ಭಟ್ಟರ ಹುಟ್ಟೂರನ್ನು ನಂದನವನವಾಗಿಸಿದೆ. ಅಲ್ಲದೆ ಆ ಪರಮಶಾಂತವಾದ ವಾತಾವರಣ ಭಟ್ಟರ ಕಾವ್ಯಸಿದ್ಧಿಗೆ ಕಾರಣವಾದ ಪ್ರತಿಭೆಯನ್ನು ಬೆಳೆಸಿ ಹಸನಾಗಿಸಿದೆ. ಅವರು ಉಲ್ಲಾಸದಿಂದ ಮೈಮರೆತು ತಾಳಲಯ ಬದ್ಧವಾಗಿ ಹಾಡತೊಡಗಿದರೆ ಪರಿ "ಶಿಶುಲೋಕ"ವನ್ನು ಹಾಗೂ ಹಿರಿಯರನ್ನು ಆ ಗಾನದಲ್ಲಿ ಮೈಮರೆ

ಯಿಸ ಬಲ್ಲರು. ಇಂತಹ ಉತ್ಸಾಹೀ ತರುಣ ಕವಿಗಳು ಬಹಳಷ್ಟು ಇದ್ದರೆ ಸಮಾಜಕ್ಕೊಂದು ಸೌಂದರ್ಯ. ಇಂತಹವರ ಇಂಚರದ ಆದರ್ಶ ಭಾವಪೂರ್ಣವಾದ ಶಿಶುಗೀತೆಗಳ ಹಾಡುವಿಕೆಯಿಂದ ನಮ್ಮ ಹೃದಯದ ಕೊಳೆ ತೊಳೆದು ಪವಿತ್ರವೆನಿಸಬೇಕಾಗಿದೆ.

ಶ್ರೀ ಭಟ್ಟರು ಬಹಳ ಸಾಹಸಪಟ್ಟು ಪ್ರಕಟಿಸಿರುವ ತಮ್ಮನ ಸಾಹಿತ್ಯಮಾಲೆಯ "ತಮ್ಮನ ಕವಿತೆಗಳು" ಹಾಗೂ "ಶಿಶುಪಹಾರ" ಪುಸ್ತಕಗಳನ್ನು ನಮ್ಮ ಸೋದರರು ಒಲ್ಮೆಯಿಂದ ಆದರಿಸಲಿ. ಪ್ರೀತಿಯ ಕರೆಗೆ ಓಗೊಟ್ಟು ಬರುವ, ಬಂದು ಹಾಡುವ, ಹಾಡಿ ತಣಿಸುವ ಭಟ್ಟರಿಗೆ ನಮ್ಮ ನಾಡಿನ ರಸಿಕ ಕಲಾಸ್ವಾದಕರು ಸರ್ವತೋಮುಖವಾದ ನೆರವು ನೀಡಲೆಂದು ಹಾರೈಸುವೆನು. ಇವರ ಲೇಖನಿಯಿಂದ ಇನ್ನೂ ಇದಕ್ಕಿಂತಲೂ ಅತಿಶಯವಾಗಿ ಸಾಹಿತ್ಯದ ಜೇನು ಜಿನುಗಲೆಂದು ದೇವರಲ್ಲಿ ನನ್ನ ಹಾರ್ದಿಕ ಹರಕೆ.

ಸಜ್ಜನ ಸೇವಕ

**ಮಾರನಾಡು ವರ್ಧಮಾನ ಹೆಗ್ಗಡೆ.**

ಶ್ರೀ ಧರ್ಮಸ್ಥಳ
೨೬-೧೦-೫೩.

## "ಬೆಳಗಾಯಿತಣ್ಣ"

ಮ ಲಗದಿರು ಓಮಗುವೆ ಬೆಳಗಾಯಿತಣ್ಣ।
ಮಾ ಮರದಿ ಕೋಗಿಲೆಯು ಹಾಡುತಿದೆಯಣ್ಣ॥
ಮಿ ರಮಿರನೆ ಮಿರುಗುತಲಿ ಸೂರ್ಯನದೊ ಬಂದ।
ಮೀ ರುತೇರುತ ಜ್ಞಾನ ಕಿರಣಗಳ ತಂದ॥
ಮು ಗುಳು ನಗುತಲಿ ಹೂವು ಗಿಡದೊಳರಳುತಿದೆ।
ಮೂ ಡಬಾಂದಳದಿ ಹೊಂಬಣ್ಣವೇರುತಿದೆ॥
ಮೆ ಲುಕಾಡುತಲಿ ಗೋವು "ಅಂಬೆ" ಎನುತಿಹುದು।
ಮೇ ಲೆ ಸುತ್ತಲು ಸೃಷ್ಟಿ ದೇವಿ ನಗುತಿಹಳು॥
ಮೈ ಮುರಿದು 'ಯೋಗಿ' ನೇಗಿಲೊಳುಳುತಲಿಹನು।
ಮೊ ಸರಿಂದ ಅಮ್ಮ ತೆಗೆಯುವಳು ಬೆಣ್ಣೆಯನು॥
ಮೋ ನದಾ 'ನಿಶಿ'ಯು ಮಾಯೆಯು ಹರಿದುಹೋಯ್ತು।
ಮೌ ಢ್ಯ ಕಳೆಯುತೆ "ಸುಪ್ರಭಾತ"ವದೊ ಬಂತು॥
ಮಂ ಗಳಾಂಗನ ಲೀಲೆ ನೋಡೆ ಬಲುಚಂದ।
ಮಃ ದೇವನಿಗೆ ನಮಿಸೊ ಬೆಳಕೆಳೆದುತಂದ॥



# ಪ್ರಾರ್ಥನೆ

ಮಾನವಂತನೆ ಜ್ಞಾನವರಸಿದೆ
ರಕ್ಷಿಸೆಮ್ಮನು ದೇವನೆ ।
ದೀನ ಬಾಲಕ ಬಾಲಕಿಯರಿಗೆ
ವಿದ್ಯೆಯನು ಕೊಡು ಈಶನೆ ॥ ೧ ॥

ಲೋಪರಹಿತನೆ ಲೋಕಪಾಲನೆ
ಸಕಲ ಜಗದಾಧಾರನೆ ।
ಕೋಪ ತಾಪದ ಶಾಪದಿಂನವು
ನುದ್ಧರಿಸು ಪರಮೇಶನೆ ॥ ೨ ॥

ಏನ ಬೇಡಲಿ ನಿನ್ನ ಬಳಿಯಲಿ
ಸರ್ವ ಗುಣ ಸಂಪನ್ನನೆ ।
ಹೀನ ಕೃತ್ಯಗಳಲ್ಲಿ ಸಿಲುಕದ
'ಮನ'ವ ಕೊಡು ಮಹದೇವನೆ ॥ ೩ ॥

ನಿನ್ನ ಚರಣದ ಸೇವೆಯನು ಕೊಡು
ಸನ್ನುತಾಂಗನೆ ದೇವನೆ ।
ಉನ್ನತದ "ಆದರ್ಶ ಶೀಲ"ಗ
ಳನ್ನು ರೂಪಿಸು ಕಾವನೆ ॥ ೪ ॥

ಪರರ ಒಡವೆಯ ಆಶಿಸದ ಸದ್
ಬುದ್ಧಿಯನು ಕೊಡು ದೇವನೆ ।
ಪರರ ವ್ಯಥೆಯನು ತಿಳಿವ ಹೃದಯವ
ಕರುಣಿಸೈ ಪರಮಾತ್ಮನೆ ॥ ೫ ॥

ತಂದೆ ತಾಯಂದಿರನು ವಿನಯದಿ
ನೋಡಿ ಕೊಳ್ಳುವ ಶ್ರದ್ಧೆಯ ।
ಮಂದಮತಿ ಯಾದೆನಗೆ ಕರುಣಿಸು
ಗುರುವಿನಡಿಯಲಿ ಭಕ್ತಿಯ ॥ ೬ ॥

# ನವಭಾರತದ ಉದಯು

ರವಿಯು ಮೂಡಲಿ ಉದಯುವಾಗಲಿ
ಕತ್ತಲೆಯು ಓಡೋಡಲಿ ।
ರಾಗದಿಂದಲಿ ಗಾನ ಮಾಡುತ
ಸಕಲ ಶುಕಪಿಕ ಹಾಡಲಿ ॥
ಸುಪ್ರಭಾತದ ಮಂದ ಮಾರುತ
ಸುಖದ ಸಖ್ಯವನೀಡಲಿ ।
ಸುರಗೆ, ಸಂಪಿಗೆ, ಬಕುಳ ಮಲ್ಲಿಗೆ
ಮಧುರ ಕಂಪನು ಬೀರಲಿ ॥
ಗಾಳಿಯೆನ್ನದೆ ಛಳಿಗೆ ಹೆದರದೆ
ಹೊಲಕೆ ರೈತನು ಸಾಗಲಿ ।
ಬಾಳಿ ಬದುಕಲು "ಯೋಗಿ ನೇಗಿಲ"
ಶ್ರಮಿಸಿ ಕೃಷಿಯನು ಮಾಡಲಿ ॥
ಎಳೆಯ ಮಕ್ಕಳು ನಿಯಮದಿಂತಾ
ನಿತ್ಯ ಕರ್ಮವ ನಡೆಸಲಿ ।
ಜ್ಞಾನಿಗಳು ಅಪರೆನಿಸಿ ಬಾಳಲು ।
ಗುರುಗಳಡಿಯನು ನೆನೆಯಲಿ ॥
ಮನೆಯ ಮಾನಿನಿ ಆರ್ಯನಾರಿಯ
ರಂತೆ ಕಾರ್ಯವನೆಸಗಲಿ ।
'ಶೀಲ ಆದರ್ಶ'ಗಳ ತೋರುತ
ನಾಡ ಕೀರ್ತಿಯ ಸಾರಲಿ ॥
ತಾನು ಬಲ್ಲವ ಅವನು ಬಿಲ್ಲವ
ಎಂಬುದನು ಜನ ಮರೆಯಲಿ
ಸರ್ವಸಮತೆಯ ಸುಖದ ಸಿಹಿಯನು
ಸಕಲ ಮನುಜರು ಸವಿಯಲಿ ॥
ಜಾತಿ ಪಂಥಗಳೆಂಬ ಭೇದವ
ಜನತೆ ತೊರೆಯುತ ನಡೆಯಲಿ !

ಜಾಣ ತನದಿಂ 'ಮಾನವತೆ' ಎಂ
ಬೊಂದು ಜಾತಿಯೆ ಉಳಿಯಲಿ ||
ರಾಮ ರಹಿಮಾನ್ ಎಲ್ಲರೊಬ್ಬನೆ
ಭೇದ ಭಾವನೆ ಹೋಗಲಿ ।
ರಾಗ ದ್ವೇಶಗಳೆಂಬ ಅರಿಗಳು
ಬೇಗದಿಂಲಯವಾಗಲಿ ||
ಧನದ ಲೋಭದಿ ಲಾಭಮಾಡುವ
ಕರಿಯ ಪೇಟೆಯು ನಿಲ್ಲಲಿ ।
ಹರಕು ವಸನದ ಬಡವನಿಗು ಅರೆ
ಹೊಟ್ಟೆಯಾದರು ತುಂಬಲಿ ||
ಭಾರತದ ಉನ್ನತಿಯ ಗೈಯಲು
ಶ್ರಮವ ಸಹಿಸಲು ಕಲಿಯಲಿ ।
ಅಂದದಿಂತಾ ಬಾಪು ಕಲಿಸಿದ
'ವಿಶ್ವಪ್ರೇಮ'ವ ತೋರಲಿ||
ಹಳ್ಳಿ ಹಳ್ಳಿಗು ಶಾಲೆಯಾಗಲಿ
ಹಳ್ಳ ಹೊಳೆಗಳು ತುಂಬಲಿ ।
ಕಾಲ ಕಾಲಕೆ ಮಳೆಯು ಸುರಿಯುತ
ವಿಪುಲ ಧಾನ್ಯವು ಬೆಳೆಯಲಿ ||
ತಂದೆ ಮೋಹನಗಾಂಧಿ ಬಯಸಿದ
ರಾಮರಾಜ್ಯವೆ ಲಭಿಸಲಿ ।
ಭರತ ಭೂಮಿಯ ಸಕಲ ಜನರಿಗೆ
ಶಾಂತಿ ಸುಖಗಳು ದೊರೆಯಲಿ ||

---

# ನಮ್ಮ ಬಾವುಟ

ಅದೋ ನೋಡು ಮುದ್ದು ಕಂದ
ನಮ್ಮ ನಾಡ ಬಾವುಟ ।
ಸತ್ಯ, ಧರ್ಮ ಶಾಂತಿಯನ್ನು
ಸಾರುತಿರುವ ಬಾವುಟ ॥ ೧ ॥

ಮೂರುಬಣ್ಣ ಧರ್ಮಚಕ್ರ
ತೋರಿ ಮೆರೆವ ಬಾವುಟ ।
ಅಖಿಲ ವಿಶ್ವದಲ್ಲಿ ನಮ್ಮ
ಕೀರ್ತಿವೆತ್ತ ಬಾವುಟ ॥ ೨ ॥

ಇದುವೆ ಪಟದ ಧ್ಯೇಯಕಾಗಿ
ವೀರರೆಷ್ಟೊ ಮಡಿದರು ।
ಇದುವೆ ಪಟದ ಮೇಲ್ಮೆಗಾಗಿ
ದುಡಿವರೆಷ್ಟೊ ಶೂರರು ॥ ೩ ॥

ಗೆಳೆಯರೆಲ್ಲ ಬನ್ನಿರಣ್ಣ
ಧೀರ ವೀರರಾಗುವ ।
ನಮ್ಮ ಪಟದ ನೆಳಲಿನಲ್ಲಿ
ಒಂದು ಗೂಡಿ ಸಾಗುವ ॥ ೪ ॥

ಭರತಭೂಮಿಗಾಗಿ ದುಡಿದ
ವೀರ ಜನರ ನೆನೆಯುವ ।
ದೇಶಸೇವೆ ಈಶಸೇವೆ
ಎನುವ ಧರ್ಮ ಪರಿಯುವ ॥ ೫ ॥

ಜಾತಿ ವೈರವನ್ನು ತೊರೆದು
ನೀತಿವಂತರೆನಿಸುವ ।
ಸತ್ಯಸಂಧರಾಗಿ ಬಂಧು
ಭಾವದಿಂದ ನೆಲಸುವ ॥ ೬ ॥

ನಮ್ಮ ಪಟವು ನಮ್ಮದಣ್ಣ
ಬಾನಿಗೇರಿ ಹಾರಲಿ ।
ನಮ್ಮ ರಾಷ್ಟ್ರ ಹಿಂದ ಭೂಮಿ
ರಾಮ ರಾಜ್ಯವಾಗಲಿ ॥ ೭ ॥

# ಕಂದನ ಕರೆ

ಬಾ ಬಾ ರಣ್ಣ ಓ ಗಣಪಣ್ಣ
ಚೌತಿಯ ಹಬ್ಬಕೆ ಬಾ ಮನೆಗೆ ।
ನೀಬಂದರೆ ನಾ ನಿರಿಸುವೆ ನಿನ್ನನು
ಸಿಂಗರಿಸಿದ ಮಂಟಪದೊಳಗೆ ॥ ೧ ॥
ಅಂದದ ಸೊಂಡಿಲು ಇರ ಬೇಕಣ್ಣ
ಇಲಿಯನು ಕರೆತರ ಬೇಕಣ್ಣ ।
'ಕಂದನ ಕರೆ' ಎನ್ನುತ ನೀ ಬರದಿರೆ
ಕೆಂಡದ ಕೋಪವು ಬಹುದಣ್ಣ ॥ ೨ ॥
ಅಪ್ಪನು, ಅಮ್ಮನು ನಾನೂ ಎಲ್ಲರು
ನಿನಗೇ ಸ್ವಾಗತ ವೀಯುವೆವು ।
ತಪ್ಪದೆ ಬಗೆ ಬಗೆ ಭಕುತಿಗಳಿಂದಲಿ
ನಿನ್ನಯ ಪೂಜೆಯ ಮಾಡುವೆವು ॥ ೩ ॥
ಸಕ್ಕರೆಯಿಂದಲೆ ಮಾಡಿದ ವಿಧ ವಿಧ
ಕಜ್ಜಾಯಂಗಳ ನೀಡುವೆವು ।
ಚಕ್ಕುಲಿ, ವಡೆ, ಮೋದಕಪಾಯಸಗಳ
ಔತಣ ದೂಟವ ಚಲಿಸುವೆವು ॥ ೪ ॥
ಕಡಲೇ ಪುರಿಗಳ ತಿನ್ನಲು ಕೊಡುವೆನು
ನಿನ್ನಾ ಪ್ರಿಯ ಇಲಿರಾಯನಿಗೆ ।
ಬಡವರ ಒಣ ಉಪಚಾರಗಳೆನ್ನದೆ
ಖಂಡಿತ ಬಾ ನಮ್ಮಯ ಮನೆಗೆ ॥ ೫ ॥

ಓದಲು ಬರೆಯಲುಬಾರದ ನನ್ನನು
ಗುರುಗಳು ಹೊಡೆವರು ಶಾಲೆಯಲಿ ।
ಓದು, ಬರಹ, ಸದ್ಬುದ್ಧಿಯ ನೀಡುತ
ಹೊಡೆತವ ತಪ್ಪಿಸು ನಿತ್ಯದಲಿ ॥ ೬ ॥
ಅಹು ದಹು ದಣ್ಣ ಮರೆತೇನಣ್ಣ
'ವರದಮೂರ್ತಿ' ಎಂಬರು ನಿನ್ನ
ಅಹು ಧಹು ದಾವರೆ ನಿನ್ನಯ ಕಂದಗೆ
ಕುಂದದ ವಿದ್ಯೆಯ ತಾರಣ್ಣ ॥ ೭ ॥

---

## ಕಂದನ ಮನೆ

ಸುತ್ತಲೂ ಹಚ್ಚ ಹಸುರಿನ ಹೊಲಗಳಿರಬೇಕು ।
ಬೆಳಗು ಸಂಜೆಗಳ ರವಿ ನೋಡ ಸಿಗಬೇಕು ॥
ಚೆಲುವಿನಾ ಗಿರಿ ಶಿಖರಗಳ ನೋಟ ವಿರಬೇಕು ।
ಹತ್ತಿರ ದೊಳೊಂದು ನದಿ ಹರಿಯುತಿರಬೇಕು ॥ ॥ ೧ ॥
ಅಚ್ಚು ಕಟ್ಟಾದೊಂದು ಪುಟ್ಟ ಮನೆಯಿರಬೇಕು ।
ಮನೆಯೆದುರು ತುಲಸಿ ವೃಂದಾ ವನವುಬೇಕು ॥
ಮನ ಮೋಹಿಪಂತೆ ಹೂವಿನ ತೋಟವಿರಬೇಕು ।
ಮೆಚ್ಚು ವಂದದೆ ಬೆಳಕು ಗಾಳಿಗೆಡೆ ಬೇಕು ॥ ॥ ೨ ॥
ಮನಪ್ರೊಲಿಪ ಖಗಗಾನ ಮಧುವ ಸವಿಯಲುಬೇಕು ।
ನಿರತವೂ ಸತ್ಯ ಸತ್ಸಂಗ ವಿರಬೇಕು ॥
ಪರಿಮೋಸ ಮಾತ್ಸರ್ಯ ದಿಂದೂರವಿರಬೇಕು ।
ಮನೆ ತುಂಬ ಒಡನಲಿವ ಗೆಳೆಯರಿರಬೇಕು ॥ ॥ ೩ ॥

# ದೇವರ ಮಕ್ಕಳು ನಾವೆಲ್ಲ

ಆ ಪರಮೇಶನ ದಯಾದಿಂದಲ್ಲವೆ
ನಾವೀ ಜಗದಲಿ ಸುಖಿಸುವೆವು ।
ಅವನಾದಯದಿಂ ಬಾಹಿರರಾದರೆ
ಪರಿಪರಿ ವಿಧದಲಿ ಬಳಲುವೆವು ॥ ೧ ॥

ಈ ಜಗವೆಂಬುವ ವಿಶಾಲ ಭವನಕೆ
ದೇವನೊಬ್ಬನೆ ಯಜಮಾನ ।
ಮನುಜರೆಂಬ ನಾವೆಲ್ಲರು ಅವನಿಗೆ
ಮಕ್ಕಳಂತೆ ಸರ್ವಸಮಾನ ॥ ೨ ॥

ಅನುದಿನವೂ ನಮ್ಮಯ ಭವಿತವ್ಯದ
ಹೊಣೆಯನು ಹೊರುವನು ಪಿತನಂತೆ ।
ಜಗದೀಶನು ನಮ್ಮೆಲ್ಲರ ಕರುಣದಿ
ಪೊರೆವನು ನಮಗೇತರ ಚಿಂತೆ ॥ ೩ ॥

ಹಗಲಿಗೆ ಸೂರ್ಯನ ಇರುಳಿಗೆ ಚಂದ್ರನ
ಸಂಧ್ಯೆಗೆರಾಗುವ ನೀಡಿಹನು ।
ಜೀವಕೆ ಮಾರುತ ಜಲಗಳ ನೀವನು
ಉಣ್ಣುವೊಡನ್ನವ ಕರುಣಿಪನು ॥ ೪ ॥

ಗಾನವ ನಾಲಿಸೆ ಹಕ್ಕಿಯ ಕೊರಳಲಿ
ಅಂದದ ಗೀತವನಿರಿಸುತಲಿ ।
ನಯನ ಮನಂಗಳ ತಣಿಸಲು ಬಣ್ಣವ
ಗಂಧವನಿತ್ತನು ಸುಮಗಳಲಿ ॥ ೫ ॥

ಮಾತೆಯ ತೆರದಲಿ ಹಾಲನ್ನುಣಿಸಲು
ಗೋವ್‌ಗಳನಿತ್ತನು ನಮಗೆಲ್ಲ ।
ನಾವೇ ಧನ್ಯರು ಈ ಸೋದರರು
ದೇವರ ಮಕ್ಕಳು ನಾವೆಲ್ಲ ॥ ೬ ॥

# ಸಮಯ

ಸಮಯವೆಂಬುದು ಸವೆಯುತಿರುವುದು
ನಿಮಿಷ ನಿಮಿಷವನೆಣಿಸುತ।
ಸಮಯದಾ ಬೆಲೆಯರಿತು ನಡೆದರೆ
ಕಾರ್ಯಸಿದ್ಧಿಯು ನಿಶ್ಚಿತ ॥ ೧ ॥
ಬಾಲ್ಯವೆಂಬುದು ಬಾಳಿನಲಿ ಚೆಲು
ಮುತ್ತಿನಂತಿಹ ಕಾಲವು।
ಬಾಲಕನೆ ನೀವೇಳೆ ಕಳೆಯದೆ
ಗಳಿಸು ವಿದ್ಯೆಯ ನಿರತವು ॥ ೨ ॥
ನಾಳೆ ನಾಡದು ಕಲಿವೆನೆನುತಲಿ
ಕಳೆಯದಿರು ನೀಸಮಯವ।
ಕಾಲ್ನಿಲುವುದೆ ಮುತ್ತೆ ದೊರೆವುದೆ
ಕಲಿಯುವುದು ನೀವಿದ್ಯೆಯ ॥ ೩ ॥
ಎಳೆಯ ಬಿದಿರದು ಬಾಗುವಂದದೆ
ಎಳೆಯ ತನದಲೆ ವಿದ್ಯೆಯು।
ಕಲಿಯೆ ಸುಲಭದಿ ಬಹುದು ಜ್ಞಾನವು
ಗಳಿಸು ಈಶನ ಪ್ರೀತಿಯ ॥ ೪ ॥



# ಸಂದಿದೆ-ಬಂದಿದೆ

ಆಟವಾಡಿ ಹರುಷದಿಂದ
ನಲಿವ ಕಾಲ ಸಂದಿದೆ ।
ಪಾಠವೋದಿ ಜಾಣನಾಗು
ವಂಥ ಕಾಲ ಬಂದಿದೆ ॥

ಕೋಲು ಚೆಂಡು ಬುಗರಿದಾಂಡು
ಹಿಡಿವ ಕಾಲ ಸಂದಿದೆ ।
ಚೀಲವೆಲ್ಲಿ ಬಳಪವೆಲ್ಲಿ
ಎನುವ ಕಾಲ ಬಂದಿದೆ ॥

ಗೇರು ಮಾವುಗಳಿಗೆ ಕಲ್ಲ
ನೆಸೆವ ಕಾಲ ಸಂದಿದೆ ।
ಗುರುಗಳೆದುರು ಕೈಯ ಕಟ್ಟಿ
ನಿಲುವ ಕಾಲ ಬಂದಿದೆ ॥

ಅಮ್ಮನನ್ನು ಕಾಡಿತಿನಸು
ತಿಂಬಕಾಲ ಸಂದಿದೆ ।
ಅಮ್ಮನೆದುರು ಓದಿ ಬರೆದು
ಮೆರೆವ ಕಾಲ ಬಂದಿದೆ ॥

ಅಕ್ಕ ತಂಗಿಯರನು ಗುದ್ದಿ
ಗೆಲುವ ಕಾಲ ಸಂದಿದೆ ।
ಚೊಕ್ಕ ವಿದ್ಯೆ ಬುದ್ಧಿಯರಿತು
ನಡೆವ ಕಾಲ ಬಂದಿದೆ ॥

# ತಮ್ಮನ ಚೆಂಡು

ನನ್ನ ತಮ್ಮನಿಗೊಂದು ಚಂದದ
ಚೆಂಡನೊಂದನು ತಂದೆನು ।
ತಮ್ಮನಾಗಲೆ ಚೆಂಡನಾಡುತ
ನೆಗೆದು ಜಿಗಿಯುತ ನಲಿದನು ॥
"ಚೆಂಡಿನೊಳಗಡೆ ಏನು ತುಂಬಿದೆ"
ಎಂದು ತಮ್ಮನು ಕೇಳಲು ।
'ಚೆಂಡಿನೊಳಗಡೆ ಗಾಳಿಯನು ತಾ"
'ತುಂಬಿಸಿರುವರು' ಎಂದೆನು ॥
ತಮ್ಮನಾಗಲೆ ಚೂರಿಯೊಂದನು
ತಂದು ಚೆಂಡನು ಹರಿಯಲು ।
"ಚೆಂಡಿನೊಳಗಡೆ ಗಾಳಿಯಿಲ್ಲವು"
'ಬರಿಯ ಚರ್ಮವು' ಎಂದನು ॥

## "ಹುಚ್ಚು"

ರಂಗನನು ಪೂಜಿಸುವ ಹುಚ್ಚು ನಮ್ಮಜ್ಜನಿಗೆ ।
ಗಂಗೆಯಲಿ ಮೀಯುವಾ ಹುಚ್ಚು ನಮ್ಮಜ್ಜಿಗೆ ॥
ಮಂಗಳಾಂಗನಭಜಿಪ ಹುಚ್ಚು ನಮ್ಮಪ್ಪನಿಗೆ ।
ಭಂಗಾರ ದೊಡವೆಗಳ ಹುಚ್ಚು ಅಮ್ಮನಿಗೆ ।

ಅಂಗಡಿಯ ತಿಂಡಿ ತಿನ್ನುವ ಹುಚ್ಚು ಅಣ್ಣನಿಗೆ ।
ತಂಗುಳನ್ನವ ನುಣುವ ಹುಚ್ಚು ಅತ್ತಿಗೆಗೆ ॥
ಸಂಗೀತವನು ಕಲಿವ ಹುಚ್ಚು ನಮ್ಮಕ್ಕನಿಗೆ ।
ಶೃಂಗಾರ ಮಾಡುವಾ ಹುಚ್ಚು ಭಾವನಿಗೆ ॥

ಅಂಗಳದಿ ಆಡುವಾ ಹುಚ್ಚು ನಂತಂಗಿಗೆ ।
ತಂಗಿಯನು ಗುದ್ದುವಾ ಹುಚ್ಚು ತಮ್ಮನಿಗೆ ॥
ತಿಂಗಳನು ನೋಡುವಾ ಬಲು ಹುಚ್ಚು ಪಾಪನಿಗೆ ।
ಮಂಗನಾಗುವ ಹುಚ್ಚು ತಲೆತುಂಬ ನನಗೆ ॥

---

## ಎಳೆಯ ಕೊರಗು

ಫೇಲು ಆದೆನಲ್ಲ । ಎಲ್ಲರು । ಗೇಲಿ ಮಾಡ್ವರಲ್ಲ ।
ದಂಡವಾಯಿತಲ್ಲ । ವರುಷವು । ಒಂದು ಸಂದಿತಲ್ಲ ।
ಅಮ್ಮ ಬೈವಳಲ್ಲ । ಮನೆಯಲಿ । ಅಪ್ಪ ಹೊಡೆವನಲ್ಲ ।
ಆಟವ ಬಿಡಲಿಲ್ಲ ಸತತವು । ಪಾಠಓದಲಿಲ್ಲ ।
ಸೋತು ಹೋದೆನಲ್ಲ । ಗುರುಗಳ । ಮಾತು ಕೇಳಲಿಲ್ಲ ।
ಮಾನವು ಹೋಯ್ತಲ್ಲ । ನನ್ನನು । 'ಕೋಣ' ನೆನುವರಲ್ಲ ।
ದಾರಿ ತೋರಲಿಲ್ಲ । ಕಾಲವು ಮೀರಿ ಹೋಯಿತಲ್ಲ ।
ಬುದ್ಧಿಯು ಬಂತಲ್ಲ । ಇನ್ನಾದರು । ಸಾಧಿಸಬೇಕಲ್ಲ ।
ಪಾಠವೋದಬೇಕು । ನಿತ್ಯವು । ಆಟವ ಬಿಡಬೇಕು ।
ನಾನೂ ಜಾಣನಾಗಬೇಕು । ಕುಲದೀಪಕನಾಗಬೇಕು ।
ಕುಲವಸಂತನಾಗಬೇಕು ॥

# ಸಂಗೀತ ಸರಸ್ವತಿ

॥ ರಾಗ ॥ ಶಿವರಂಜಿನಿ ॥ ತಾಲ ॥ ದಾದರಾ (6 ಅಕ್ಷರ)

ಅರೋಹ । ಸರಿಗಪಧಸ । ಸಧಪಗರಿಸ ॥ ಕಾಪಿಜನ್ಯ.

ಸ್ಥಾಯಿ

ಗ ರಿ ಸ ಧ ಪ ಗ। ರಿ ಗ ಪ ಗ ರಿ ಸ॥ ಸ–ರಿ ಗ ಪ ಧ। ಪ ಗ ಪ ಗ ರಿ ಸ॥

ವಾ–ನನತಿ –। ವಿಧಿಯಸತಿ –॥ ದೆ–ವಿ ಶ್ರೀ–ಸ। ರ–ಸ್ವತಿ – –॥

ಸ ರಿ ಧ ಸ–ಸ। ರಿ ಗ ಸ ರಿ ಗ ಪ॥ ಪ ದ ಪ ಧ ಸ ಸ। ರಿ ಗ ರಿ ಸ – –॥

ದಿ–ನ ಬಾ – ಲ। ಕರಿಗೆವಿ–ದ್ಯೆಯ–ನ್ನು ನಿ–ಡು। ಭಾ–ರತಿ – –॥

ಧ ಸ ಧ ಪ– –। ಗ ಪ ಗ ರಿ – –॥

ಭಾ–ರತಿ – –। ಭಾ–ರತಿ – –॥

ಸ ರಿ ಧ ಸ–ಸ। ರಿ ಗ ಸ ರಿ ಗ ಪ॥ ಪ ಧ ಪ ಧ ಸ ಸ। ರಿ ಗ ರಿ ಸ – –॥ಗರಿ

ದಿ–ನ–ಬಾ ಲ। ಕರಿಗೆ ವಿ–ದ್ಯೆ। ಯ–ನ್ನು ನಿ–ಡು। ಭಾ–ರತಿ–॥ ವಾ

॥ ಅಂತರಾ ॥

ಪ ಧ ಪ ಧ ಸ ಸ। ಸ ರಿ ರಿ ರಿ ರಿ ಸ॥ ಸ ಧ ಸ ಸ ರಿ ರಿ। ರಿ ಗ ರಿ ಸ – –॥

ಸ–ತ್ಯ ಧ–ರ್ಮ। ದ–ಲ್ಲಿ ನಡೆಸ॥ ಸ–ತ್ಪಥವನು। ತೊ–ರಿಸೈ– –॥

ರಿ ಗ ರಿ ಸ ರಿ ಸ। ಧ ಸ ಧ ಪ ಧ ಪ॥ ಗ ಪ ಗ ರಿ ಗ ರಿ। ಸ ರಿ ಗ ಪ ಧ ಸ॥

ನಿ–ತ್ಯನಿ–ನ್ನ। ಸೆ–ವೆ ಗೈ–ವ॥ ಶಿ–ಲವ–ನ್ನು। ಕರುಣಿಸೈ – –॥

॥ ೨ನೇ ಅಂತರಾ ॥

ಜಗದ ಆ–ದಿ। ಶಕುತಿ ನಿ–ನು॥ ಪಾ–ಲಿಸೆ–ಮ್ಮ। ಸ–ನ್ಮತಿ – –॥

ಜಗದ ಜನಕೆ। ಶಾಂ–ತಿ ಸುಖವ। ಕೊ–ರುವೆನು ಸ।ರ–ಸ್ವತಿ– –॥

ವಾ– ನಪತಿ –॥

# ತಾಜಮಹಲು

ತಾಜಮಹಾಲಿನ ಕಥೆಯನುಪೇಳುವೆ
ಕನ್ನಡ ನಾಡಿನ ಕಂದರಿಗೆ ।
ಯಮುನಾತೀರದ ಆಗ್ರಾ ನಗರದಿ
ಕೌತುಕವೊಂದಿದು ಜಗದೊಳಗೆ ॥
ಶ್ವೇತ ಶಿಲೆ
ಶಿಲ್ಪ ಕಲೆ
ನಮ್ಮ ನಾಡಿನ ಕೀರ್ತಿಯೆಳೆ ॥

ಡಿಲ್ಲಿಯನಾಳಿದ್ದ ಮೊಗಲ ಬಾದಶಹ
ಶಹಾಜಹಾನನ ರಚನೆಯಿದು ।
ಅವನಾ ಮಡದಿಯರಲಿ ಬಲು ಮುದ್ದಿನ
'ಮುಮ್ ತಾಜ್' ಬೀಬಿಯ ಗೋರಿಯಿದು ॥
ಮಂದಿರವು
ಸುಂದರವು
ಅಂದಿನ ಜನರಾ ಸಾಹಸವು ॥

ಶಹಾಜಹಾನನು ರಸಿಕತೆಯಿಂದಲಿ
ಮಡದಿಯು ಮೇಲಣ ಒಲವಿಂದ ।
'ತಾಜಮಹಲು' ಎಂಬೀ ಪೆಸರಿಂದಲೆ
ರೂಪಿಸಿದನು ಸಡಗರದಿಂದ ॥
ಆ ಚೆಂದ
ಆನಂದ
ನೋಡಲು ಅಚ್ಚರಿಯಿದು ಕಂದ ॥

ತಾಜಮಹಾಲಿನ ಚೆಲುವನು ಕಾಣಲು
ವಿದೇಶದಿಂಬರುವರು ಜನರು ।
ಏನಚ್ಚರಿಯಿದು ಎಂತಹ ಸೊಬಗಿದು
ಎನುತಲಿ ತಾ ಹಿಂತೆರಳುವರು ॥

# ಮಡಿವಾಳ

## (ಅಭಿನಯ)

ಊರ ಜನರ ಮಡಿವಾಳನು ನಾನು
ಊರೊಳಗೇನಾದರೆ ನನಗೇನು
ಅರಿವೆಗಳೊಗೆದು ಜೀವಿಪೆ ನಾನು
ಅರಿವೆಗಳುಂಟೇ ಅರಿವೆಗಳು ॥ ೧ ॥

ಊರೊಳಗೆಲ್ಲಾ ಮನೆಯಿಂ ಮನೆಗೆ
ತಿರುಗುತಲರಿವೆಯ ತರುವೆನು ಹೊಳೆಗೆ
ಎಲ್ಲಾ ಅರಿವೆಗಳೊಂದೇ ನನಗೆ
ಎಲ್ಲರ ಅರಿವೆಗಳೊಗೆಯುವೆನು ॥ ೨ ॥

ಧನಿಕರ ಬಡವರ ಅರಿವೆಗಳೆಂದು
ಕೆಲಸದಿ ಮಾಡೆನು ಭೇದವನೆಂದು
ಅರಿವೆಗಳೆಲ್ಲವ ಬಲು ಶುಚಿ ಮಾಡಿ
ಅರಿವೆಯ ತಂದೆ ಅರಿವೆಯನು ॥ ೩ ॥

ಜುಬ್ಬದ ಜೇಬಲಿ ಹಣವನೆ ಮರೆವರು
ಗುಬ್ಬಿಗಳನು ಕಳಚದವರು ಕೆಲರು
ಒಬ್ಬೊಬ್ಬರು ಜನಿವಾರವ ಕೊಡುವರು
ಎಲ್ಲರ ಚಾಕರಿ ಮಾಡುವೆನು ॥ ೪ ॥

ಜಟ್ಟಿಯ ಬಿಗಿದು ಬಟ್ಟೆಯ ತೊಳೆದು
ರಟ್ಟೆಯ ನೋಡಿರಿ ಹೇಗಿದೆ ಬೆಳೆದು
ನಾನೇ ಬಲು ಸುಖಿ ದುಃಖವ ತೊರೆದು
ಎಲ್ಲರ ಸೇವೆಯ ಮಾಡುವೆನು ॥ ೫ ॥

ಆಳುವ ದೊರೆಯನು ಕರೆವರು 'ಅರಸ'
ಪೇಳುವರೆನ್ನನು ಊರಿನ 'ಅಗಸ'
ಒಂದೇ ಅಕ್ಷರದೊಳಗಿದೆ ಅಂತರ
ಅರಿವೆಗಳುಂಟೇ ಅರಿವೆಗಳು ॥ ೬ ॥

# "ಅರಬರು"

'ಅರೇಬಿಯಾ' ದಲಿ ನೆಲಸಿಹ ಜನರನು
'ಅರಬರು' ಎಂದು ಕರೆಯುವರು
ಮರಳು ತುಂಬಿರುವಾ ಈ ಭಾಗಕೆ
'ಮರುಳುಗಾಡು' ಎಂದೆನ್ನುವರು ||
ಆ ದೇಶದಿ ಮಳೆ ಸುರಿವುದೆ ಇಲ್ಲ
ಇರುಳಲಿ ಬಲುಛಳಿಯು |
ಹಗಲಲಿ ಬಿಸಿ ಬಿಸಿಲೇರುತ ಲೇರುತ
ಜನರಿಗೆ ಬಲು ಸೆಖೆಯು ||
ಸುಂಟರ ಮಾರುತ ಮೊರೆಯುವುದು
ಮರಳಿನ ರಾಶಿಯ ರಚಿಸುವುದು |
ಕೆಲವೆಡೆಯಲಿ ತಾ ನೀರುಂಟು
ಅಲ್ಲಿಯೆ ಜನರಾಶ್ರಯವುಂಟು ||
ನೀರಿನ ಬುಗ್ಗೆಗಳಿರುವಾ ಜಾಗಕೆ
'ಒಯಸಿಸ್' ಎನುತಲಿ ಕರೆಯುವರು
ಒಯಸಿಸ್ ಗಳಲೇ ಬೆಳೆಗಳ ಬೆಳೆವರು |
ಅಲ್ಲೇ ಕೆಲವರು ವಾಸಿಸುತಿರುವರು ||
ಖರ್ಜೂರವನ್ನೇ ಬೆಳೆಸುವರು
ಅದರಿಂ ಜೀವನ ಮಾಡುವರು||
ಅರಬರಿಗೊಂದು ಕುದುರೆಯು ವಾಹನ
ಉಷ್ಟ್ರ ಪಕ್ಷಿಯದು ಪಯಣದ ಸಾಧನ ||
ಎಲ್ಲರು ಒಂಟೆಯ ಸಾಕುವರು
ಒಂಟೆಯ ಹಾಲನೆ ಸವಿಯುವರು

ಮರಳಲಿ ನಲಿವಾ 'ಡುಬ್ಬ'ದ ಒಂಟೆಗೆ
'ಮರಳುಗಾಡು ಹಡಗೆ'ನ್ನುವರು ॥
ಡುಬ್ಬಗಳೆರಡಿಹ ಒಂಟೆಯನೇರಿ
ಆದರಾ ಬೆನ್ನಿಗೆ ಹೇರನು ಹೇರಿ
ಸಾಗುವರೈ ಬಲುದೂರದ ದಾರಿ
"ಕೆರವನ್" ಹೆಸರಿನ ಇವರ ಸವಾರಿ ॥
"ಕೆರವನ್" ನೋಟಕೆ ಬಲು ಚೆಂದ
ಅರಬರಿಗಿದುವೇ ಆನಂದ
ಊರಿಂದೂರಿಗೆ ಚರಿಸುವರು
ಈ ಪರಿ ಸುಖದಿಂಬಾಳುವರು ॥

## ಮಳೆಯ ಕಥೆ

ಬಂದನು ಬಂದನು ಓಡುತ ಬಂದನು
ನೆಗೆಯುತ ಬಂದನು ಮಳೆರಾಯ ।
ಜಗವನು ತಣಿಸಲು ಬೆಳೆಗಳ ಬೆಳೆಸಲು
ನಲಿಯುತ ಬಂದನು ಮಹರಾಯ ॥
ಕಡಲಿನ ನೀರದೊ ಬಿಸಿಲಿಗೆ ಬಾನಿಗೆ
ಏರಿತು ಆವಿಯ ರೂಪದಲಿ ।
ಆವಿಯು ಕರಿ ಕರಿ ಮುಗಿಲಿನ ರೂಪವ
ತಾಳುತ ತೇಲಿತು ಬಾನಿನಲಿ ॥
ಗಾಳಿಯು ಬೀಸಲು ಮೋಡವು ಬೆಟ್ಟಕೆ
ಢಿಕ್ಕಿಯ ಬಡಿಯಿತು ಜೋರಾಗಿ
'ಗುಡು ಗುಡು' ಗುಡುಗಿತು ಮಿಂಚದೊ ಥಳಿಸಿತು
ಹನಿ ಮಳೆ ಸುರಿಯಿತು ನೀರಾಗಿ ॥
ಕೆರೆ ತೊರೆ ತುಂಬಿತು ತುಳುಕಿತು ಉಕ್ಕಿತು
ಹೊಳೆಗದೊ ಹರಿಯಿತು ಗೆಲುವಿಂದ
ಹೊಳೆಗಳ ನೀರದೊ ಕಡಲಿಗೆ ಸೇರಿತು
ಇದುವೇ ಮಳೆಯಾ ಕಥೆಯಂದ ॥

## ಇರುವೆ-ಮಗು ಸಂವಾದ

(ಅಭಿನಯ)

ಮಗು:— ಇರುವೆ ಇರುವೆ ಎಲ್ಲಿಗೆ ನಡೆವೆ
ವೀರ ಯೋಧರಂತೆ ।
ಇರುವೆ:— ಒಂದೇ ಸಾಲಲಿ ನಡೆವುದು ನಮ್ಮ
 ...ಕ್ರಮವಂತೆ ॥
ಮಗು:— ಇರುವೆ ಇರುವೆ ಮದುವೆ ಇದೆಯೇ
ದಿಬ್ಬಣವೇಕಂತೆ ।
ಇರುವೆ:— ಮದುವೆಯಿಲ್ಲ ಮುಂಜಿಯಿಲ್ಲ
"ಐಕ್ಯವು" ಬೇಕಂತೆ ॥
ಮಗು:— ಇರುವೆ ಇರುವೆ ಜಗಳವು ಇದೆಯೇ
ವೈರಿಯು ಯಾರಂತೆ ।
ಇರುವೆ:— ವೈರಿಯು ಇಲ್ಲ ಜಗಳವು ಇಲ್ಲ
'ಗೆಳೆತನ' ವಿದೆಯಂತೆ ॥
ಮಗು:— ಇರುವೆ ಇರುವೆ ಸಣ್ಣನೆ ಇರುವೆ
ಕಾಳನ್ನೊಯ್ವೆಯಂತೆ ।
ಇರುವೆ:— ಅಪಾದಹಾವಣ್ಣ ಇದುವೇ ನಮ್ಮಯ
'ಶೌರ್ಯ'ದ ಗುಣವಂತೆ ॥
ಮಗು:— ಇರುವೆ ಇರುವೆ ಚಿಕ್ಕನಸಿರುವೆ
ಕಡಿಯುವುದೇಕಂತೆ ।
ಇರುವೆ:— ನಮ್ಮ ಬಳಗವ ತುಳಿಯುವ ತುಂಟರ
'ಕಡಿಯಲೆ' ಬೇಕಂತೆ ॥
ಮಗು:— ಇರುವೆ ಇರುವೆ ನಿಮಗೂ ಕಾಳಿನ
ಕಣಜವು ಇದೆಯಂತೆ ।
ಇರುವೆ:— ಮಳೆಗಾಲದಿ ನಮಗುಣ್ಣಲು ಕಾಳಿನ
'ಸಂಗ್ರಹ' ಬೇಕಂತೆ ॥
ಮಗು:— ಇರುವೆ ಇರುವೆ ಅದೇನನು ನುಡಿವೆ
ಬೇಗನೆ ಹೇಳಂತೆ ।
ಇರುವೆ:— ನಮ್ಮಯ ಬಳಗದ 'ಎಲ್ಲಾ ಗುಣಗಳು'
ಮಗುವಿಗು ಬೇಕಂತೆ ॥

# ಬಂತು-ಯುಗಾದಿ

(ಅಭಿನಯ)

ಬಂತು ಯುಗಾದಿ........ಬಂತು ಯುಗಾದಿ ॥
ಚೆಲುವ ಚೈತ್ರನನ್ನು ಕರೆದು ।
ಬೇವು ಬೆಲ್ಲವನ್ನು ಹಿಡಿದು ॥ ಬಂತು ॥
ಮಾವು ಮರದ ತಳಿರಿನಲ್ಲಿ ।
ಹೂವುಗಳ ಸುಗಂಧದಲ್ಲಿ ।
ಸವಿಯು ಜೇನ ಗೂಡಿನಲ್ಲಿ ।
ಕೋಗಿಲೆಯಾ ಗಾನದೊಡನೆ ॥ ಬಂತು ॥
ಹಳೆಯ ಕೊಳೆಯ ತೊಳೆದುಕೊಂಡು ।
ಹೊಸತು ಕಳೆಯ ತಳೆದುಕೊಂಡು ।
ವರ ವಸಂತ ಋತುವನೇರಿ ।
ಹೊಸತು ವರುಷ "ವಿಜಯ" ನೊಡನೆ ॥ಬಂತು॥
ನಾಡಜನರನೆಲ್ಲ ತಣಿಸಿ ।
ನಾಡಿಗೆಲ್ಲ ಶುಭವ ಬಯಸಿ ।
ನಾಡ ಚಿಣ್ಣರನ್ನು ನಲಿಸಿ ।
ಗೆಲವು ಶಾಂತಿ ಸುಖಗಳೊಡನೆ ॥ ಬಂತು ॥

## ಆ-ಹ-ಪ್ಪ-ಳ

ಅಕ್ಕನು ಭಾವನು ಒಂದೆಡೆ ಸೇರಿ
ಜಗಳವ ಮಾಡಿದರೇನೋ ಭಾರಿ
ದೂರದಿಂದಲೆ ನಾನದ ನೋಡಿ
ಚಪ್ಪಳೆ ಬಡಿದೆನು ನಗೆಯಿಂಕೂಡಿ
ಅಕ್ಕನು ಕಂಡು ನನ್ನೆಡೆ ಬಂದು
ಕೆಪ್ಪೆಗೆ ಜಗಿದಳು ಬಾತಿತು ಕೆಪ್ಪೆ
ತಪ್ಪಿತು ಕಾಲು ಮುಚ್ಚಿತು ರೆಪ್ಪೆ
ಅಪ್ಪಪ್ಪಪ್ಪಾ ಧೊಪ್ಪನೆ ಬಿದ್ದೆ
ಸಪ್ಪಳ ಕೇಳುತಲಮ್ಮನು ಬಂದಳು
"ಪಾಪನಿಗೇನ್ಯಾತಪ್ಪ" ಎಂದಳು
ಅಕ್ಕನು ಆಗಲೆ ಹಪ್ಪಳ ತಂದಳು
"ದಪ್ಪದ ಹಪ್ಪಳ ತಿನ್ನೋ" ಎಂದಳು
ಕಪ್ಪೆಯಂತೆ ನಾ ಗಪ್ಪನೆ ಎದ್ದು
ತೆಪ್ಪಗೆ ತಿಂದೆನು ಆ-ಹ-ಪ್ಪ-ಳ

## ತಂಗಿ ಅಪ್ಪಿ

ಪುಟ್ಟ ತಂಗಿ ಅಪ್ಪಿ ।
ನನ್ನ ಶಾಯಿ ಕುಪ್ಪಿ ।
ಹಿಡಿದು ಕೊಳಲು ನೆಲಕೆ ಬಿತ್ತು
ಅವಳ ಕೈಯ ತಪ್ಪಿ ॥ ೧ ॥

ನನಗೆ ಬಂತು ಸಿಟ್ಟು ।
ಹಿಡಿದೆನವಳ ಜುಟ್ಟು ।
ಅವಳ ಕೆನ್ನೆ ನೋಯುವಂತೆ
ಜಗಿದೆನೆರಡು ಪೆಟ್ಟು ॥ ೨ ॥

ತಂಗಿಯಾಗ ಕೂಗಿ ।
ತನ್ನ ಕೊರಳ ತೂಗಿ ।
'ಅಣ್ಣ ಹೊಡೆದ'ನೆಂದಳಾಗ
ತಾಯ ಬಳಿಗೆ ಹೋಗಿ ॥ ೩ ॥

ಆಗ ಬಂದು ಅಪ್ಪ ।
ತಿಳಿದು ನನ್ನ ತಪ್ಪ ।
"ತಮ್ಮ ತಂಗಿಯರನು" ಹೊಡೆಯ
ಬಾರದೆಂದನಪ್ಪ ॥ ೪ ॥

## "ಮಂಗಳ"

ಮಂಗಳಂಜಯ ಮಂಗಳಂ ||

ಮೊಲೆ ಹಾಲುಣಿಸಿದ ಅಮ್ಮನಿಗೆ ।
ಬೆಳಕನು ಕೊಡುತಿಹ ಸೂರ್ಯನಿಗೆ ।
ಹೊಲದೊಳು ದುಡಿಯುವ ನೇಗಿಲ ಯೋಗಿಗೆ ।
ಬೆಳೆಗಳ ನೀಡುವ ಶ್ರೀ ಭುವಿದೇವಿಗೆ || ಮಂ ||

ಕನ್ನಡನಾಡಿನ ಗೆಳೆಯರಿಗೆ ।
ಕನ್ನಡ ಕವಿಗಳ ಚೆಲ್ನುಡಿಗೆ ।
ಕನ್ನಡನಾಡಿನ ಕನ್ನಡ ಜನರಿಗೆ ।
ಹೊನ್ನಿನುಡಿಗೆಯಾ ಪಚ್ಚೆಯ ಪೈರಿಗೆ || ಮಂ ||

ಪಾವನೆ ಯಮುನಾ ಜಾಹ್ನವಿಗೆ ।
ಆ 'ಮಹಾತ್ಮ' ಗುರು ತಾತನಿಗೆ ।
ಕಾಮಧೇನುವಿಗೆ, ಸತ್ಯಕೆ ಶಾಂತಿಗೆ ।
ಪ್ರಾಮಾಣಿಕತೆಗೆ, ಸಮತೆಗೆ ನೀತಿಗೆ || ಮಂ ||

ಅಕ್ಷರ ಕಲಿಸಿದ ಗುರುವರಗೆ ।
ಮುಖ್ಯ ಮಂತ್ರಿ ಶ್ರೀ ಜವಹರಗೆ ।
ಪ್ರಕೃತಿಲಲನೆಗೇ ಭಾರತ ಮಾತೆಗೆ ।
ರಕ್ಷಿಸುತಿರುವಾ ಪರಮೇಶ್ವರನಿಗೆ || ಮಂ ||

